ಪತ್ತೆಮಾಡಿದ ಫಿರ್ಯಾದುದಾರರು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11,13(ಎಫ್),14, 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ: 452/2007 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಮೇಲ್ಕಂಡ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡಿರುತ್ತಾರೆ. ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ವಶಪಡಿಸಿಕೊಂಡಿರುವ ವಸ್ತುಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಿರುವ ಮದ್ಯದ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಎಥನಾಲ್ ಅಂಶ ಇರುವುದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಮೇಲ್ಕಂಡ ನಕಲಿ ಮದ್ಯ, ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನುಗಳು, ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳು ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:27–06–2008 ಮತ್ತು 02–06–2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 181.400 ಲೀ ನಕಲಿ ಮದ್ಯ, ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನುಗಳು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:06–10–2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂಖ್ಯೆ: ಎಂಇಡಿ–7048 ವಾಹನಕ್ಕೆ ಸಂಬಂಧ ಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ:ಎಂಇಡಿ–7048 ವಾಹನಕ್ಕೆ ಸಂಬಂಧಿಸಿದಂತೆ ಶ್ರೀಮತಿ ರತ್ನಮ್ಮ, ನಂ.406, 1ನೇ ಮುಖ್ಯರಸ್ತೆ, 1ನೇ ರಸ್ತೆ, ವೀರಭದ್ರೇಶ್ವರ ಚಿತ್ರಮಂದಿರದ ಹತ್ತಿರ, ಕಮಲಾನಗರ, ಬೆಂಗಳೂರು–79 – ಇವರು ವಾಹನದ ಮಾಲೀಕರೆಂಬುದು ಹಾಗೂ ಸದರಿ ವಾಹನದ ತೀರುವಳಿ ಪತ್ರವನ್ನು ದಿನಾಂಕ:03–07–1997 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಸನ ಇವರಿಗೆ ನೀಡಿರುವುದು ಕಂಡು ಬಂದಿರುತ್ತದೆ. ಆದಾಗ್ಯೂ ಶ್ರೀಮತಿ ರತ್ನಮ್ಮ ಇವರಿಗೆ ದಿನಾಂಕ:23–05–2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತುರುಗಿ ಬಂದಿರುತ್ತದೆ

ಮೇಲ್ಕಂಡ ವಾಹನದ "ಬಿ" ವಹಿ ಕೋರಿ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಸನ ಜಿಲ್ಲೆ ಇವರಿಗೆ ಹಲವು ಬಾರಿ ಪತ್ರ ಬರೆಯಲಾಗಿರುತ್ತದೆ. ಇದುವರೆವಿಗೂ ಯಾವುದೇ ಪ್ರತಿಕಿಯೆ ಇರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಜಪ್ತುಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ:ಎಂಇಡಿ–7048 ವಾಹನದಲ್ಲಿ ದಿನಾಂಕ:07–11–2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (23) ತಿಂಗಳುಗಳಿಗೂ ಹೆಚ್ಚುಕಾಲ ಕಳೆದರೂ ಸಹ ಜಪ್ತುಪಡಿಸಿರುವ ವಾಹನವು ತನ್ನೆದೆಂದಾಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/06/2008–09, ದಿನಾಂಕ:2ನೇ ನವೆಂಬರ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಅಪರಾಧ

ಸಂಖ್ಯೆ:452/2007, ದಿನಾಂಕ:07–11–2007 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ: ಎಂಇಡಿ–7048 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ನವೆಂಬರ್ ತಿಂಗಳ 02ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1127 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/397/2008–09, ದಿನಾಂಕ:2ನೇ ನವೆಂಬರ್, 2009**

ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಅಪರಾಧ ಸಂಖ್ಯೆ: 246/2008, ದಿನಾಂಕ:20–05–2008

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು | 1) ಗಿರೀಶ್ ಬಿನ್ ಸಿದ್ದೇಗೌಡ, ಬಿ.ಗೌಡಗೆರೆ |
| ಗ್ರಾಮಾಂತರ ಪೋಲೀಸ್ ಠಾಣೆ, | 2) ಮನು ಬಿನ್ ಕೃಷ್ಣೇಗೌಡ, ಬಿ.ಗೌಡಗೆರೆ. |
| ಮಂಡ್ಯ ತಾಲ್ಲೂಕು. | 3) ಸಂತೋಷ್ ಬಿನ್ ಬೆಟ್ಟಯ್ಯ, ಹನಕೆರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20–05–2008 ರಂದು ಮಧ್ಯಾಹ್ನ 01–00 ರ ಸಮಯದಲ್ಲಿ ಹನಕೆರೆ–ಕಚ್ಚಿಗೆರೆ ರಸ್ತೆಯಲ್ಲಿ ರುವ ಗೌರಿಕುಂಡಪ್ಪನ ಸಿದ್ದಪ್ಪರವರ ತೋಟದಲ್ಲಿ ದಾಳಿ ನಡೆಸಿ ಕಂಡು ಬಂದ ಅಕ್ರಮಕ್ಕೆ ಸಂಬಂಧಿಸಿದಂತೆ ಒಟ್ಟಾರೆ 14.900 ಲೀ ಮದ್ಯ, ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳಾದ ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನುಗಳು, ಮುಚ್ಚಳಗಳು, ಲೇಬಲ್‌ಗಳು, ಕಪ್ಪುದ್ರವ ಹಾಗೂ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–14/ಹೆಚ್–3837 ವಾಹನವನ್ನು ಪಿರ್ಯಾದುದಾರರು ಪಂಚನಾಮೆಯಲ್ಲಿ ಅಮಾನತ್ತುಪಡಿಸಿಕೊಂಡು, ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13, 13(ಎಫ್), 14, 15, 32 ಮತ್ತು 34 ರ ರೀತ್ಯಾ ಅಪರಾಧ ವಾದ್ದರಿಂದ ಈ ಬಗ್ಗೆ ಅಪರಾಧ ಸಂ: 246/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ವಶಪಡಿಸಿಕೊಂಡಿರುವ ವಸ್ತು ಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಪ್ರಕರಣದಲ್ಲಿ ಜಪ್ತುಪಡಿಸಿರುವ ಮದ್ಯದಲ್ಲಿ ಎಥನಾಲ್ ಅಂಶ ಇರುವುದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಮೇಲ್ಕಂಡ ನಕಲಿ ಮದ್ಯ, ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನುಗಳು, ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳು ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳಲು ದಿನಾಂಕ:26–05–2009, 17–07–2009 ಮತ್ತು 19–08–2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 14.900 ಲೀ ನಕಲಿ ಮದ್ಯ, ಖಾಲಿ ಬಾಟಲುಗಳು, ಪ್ಲಾಸ್ಟಿಕ್ ಕ್ಯಾನುಗಳು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:29–05–2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನದ "ಬಿ" ವಹಿ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರಿಗೆ ದಿನಾಂಕ:29–05–2009, 13–08–2009 ಮತ್ತು 12–10–2009 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿರುತ್ತದೆ. ಇದುವರೆವಿಗೂ ಯಾವುದೇ ಪ್ರತಿಕಿಯೆ ಇರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (17) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ

ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪ ವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/397/2008–09, ದಿನಾಂಕ:2ನೇ ನವೆಂಬರ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಮಂಡ್ಯ ತಾಲ್ಲೂಕು ಇವರ ಅಪರಾಧ ಸಂಖ್ಯೆ:246/2008, ದಿನಾಂಕ:20–05–2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–14/ಹೆಚ್–3837 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2009 ನೇ ಇಸವಿ ನವೆಂಬರ್ ತಿಂಗಳ 2 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.1129 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/244/2008–09, ದಿನಾಂಕ:2ನೇ ನವೆಂಬರ್, 2009**

ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ಸಾಗರ ಪೋಲೀಸ್ ಠಾಣೆ, ಶ್ರೀರಂಗಪಟ್ಟಣ ತಾಲ್ಲೂಕು ಇವರ ಅಪರಾಧ ಸಂಖ್ಯೆ: 111/2007, ದಿನಾಂಕ:18–08–2007

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು | 1) ಫಜೀಲ್, ಉದಯಗಿರಿ, ಮೈಸೂರು. |
| ಕೆ.ಆರ್.ಸಾಗರ ಪೋಲೀಸ್ ಠಾಣೆ, | 2) ಫೈರೋಜ್, ಉದಯಗಿರಿ, ಮೈಸೂರು. |
| ಶ್ರೀರಂಗಪಟ್ಟಣ ತಾಲ್ಲೂಕು. | 3) ಬೋರಯ್ಯ, ಮಾರಗೊಂಡನಹಳ್ಳಿ ಗ್ರಾಮ, ಕೆ.ಅರ್.ನಗರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17–08–2007 ರಂದು ರಾತ್ರಿ 01–00 ರ ಸಮಯದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನ ಕೆ.ಆರ್. ಸಾಗರದಲ್ಲಿರುವ ಆದಿಶಕ್ತಿ ವೈನ್ಸ್‌ಸ್ಟೋರ್ ಮುಂಭಾಗದ ಕೆ.ಆರ್.ಪೇಟೆ –ಕೆ.ಅರ್.ಎಸ್ ರಸ್ತೆಯಲ್ಲಿ ಅಕ್ರಮವಾಗಿ 455.000 ಲೀ ಮದ್ಯಸಾರವನ್ನು ಅಂಬಾಸಿಡರ್ ಕಾರು ಸಂಖ್ಯೆ:ಎಂವೈಓ–7755 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 34 ಮತ್ತು 36 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ: 111/2007 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಮೇಲ್ಕಂಡ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಪಂಚನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡಿರುತ್ತಾರೆ. ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ ಇವರಿಗೆ ವಶಪಡಿಸಿಕೊಂಡಿರುವ ವಸ್ತುಗಳನ್ನು ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಪ್ರಕರಣದಲ್ಲಿ ಜಪ್ತುಪಡಿಸಿರುವ ಮದ್ಯಸಾರದ ಮಾದರಿಯ ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರಕಾರ ಆಲ್ಕೋಹಾಲ್ ಅಂಶ ಇರುವುದು ರಸಾಯನ ತಜ್ಞರ ವರದಿಯಿಂದ

ದೃಢಪಟ್ಟಿರುವುದರಿಂದ ಮೇಲ್ಕಂಡ ಮದ್ಯಸಾರ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:22-12-2008 ಮತ್ತು 20-03-2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 455.000 ಲೀ ಮದ್ಯಸಾರ ಮತ್ತು ಇತರೇ ವಸ್ತು ಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:26-03-2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜಯನಗರ, ಬೆಂಗಳೂರು (ದಕ್ಷಿಣ) ಇವರು ಅಂಬಾಸಿಡರ್ ಕಾರು ಸಂಖ್ಯೆ:ಎಂವೈಓ-7755 ವಾಹನದ ವಿವರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು (ಸೆಂಟ್ರಲ್) ಇವರಿಂದ ಪಡೆಯಲು ಸೂಚಿಸಿರುತ್ತಾರೆ. ಅದರಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು (ಸೆಂಟ್ರಲ್) ಇವರಿಂದ ಮೇಲ್ಕಂಡ ವಾಹನದ "ಬಿ" ವಹಿಯನ್ನು ಪಡೆಯ ಲಾಗಿದೆ. ಸದರಿ "ಬಿ" ವಹಿಯ ಪರಿಶೀಲನೆಯಿಂದ ನೊಂದಣಿ ಸಂಖ್ಯೆ: ಎಂವೈಓ-7755 ವಾಹನಕ್ಕೆ ಸಂಬಂಧಿಸಿದಂತೆ ಶ್ರೀ ಫಯಾಜ್ ಅಹಮದ್ ಬಿನ್ ಲೇಟ್ ಎಸ್.ಎ.ಸಾತರ್, ನಂ.23/2, ವಿಟ್ಟಲ್ ಮಲ್ಯ ರೋಡ್, ಬೆಂಗಳೂರು-01 - ಇವರು ವಾಹನದ ಮಾಲೀಕರೆಂಬುದು ಹಾಗೂ ಸದರಿ ವಾಹನದ ತೀರುವಳಿ ಪತ್ರವನ್ನು ದಿನಾಂಕ:18-04-1991 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಇವರಿಗೆ ನೀಡಿರುವುದು ಕಂಡು ಬಂದಿರುತ್ತದೆ. ಆದಾಗ್ಯೂ ಶ್ರೀ ಫಯಾಜ್ ಅಹಮದ್ ಬಿನ್ ಲೇಟ್ ಎಸ್.ಎ.ಸಾತರ್ ಇವರಿಗೆ ದಿನಾಂಕ:25-09-09 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ)ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ.

ಮೇಲ್ಕಂಡ ವಾಹನದ "ಬಿ" ವಹಿ ಕೋರಿ ಈ ಪ್ರಾಧಿಕಾರದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿ ನಗರ, ಬೆಂಗಳೂರು (ಪಶ್ಚಿಮ) ಇವರಿಗೆ ದಿನಾಂಕ:12-10-2009 ರಂದು ಪತ್ರ ಬರೆಯಲಾಗಿರುತ್ತದೆ. ಇದುವರೆವಿಗೂ ಯಾವುದೇ ಪ್ರತಿಕಿಯೆ ಇರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ: ಎಂವೈಓ-7755 ವಾಹನದಲ್ಲಿ ದಿನಾಂಕ:18-08-2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (26) ತಿಂಗಳುಗಳಿಗೂ ಹೆಚ್ಚುಕಾಲ ಕಳೆದರೂ ಸಹ ಜಪ್ತುಪಡಿಸಿರುವ ವಾಹನವು ತನ್ನದೆಂದಾಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟು ಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರು ವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/244/2008-09, ದಿನಾಂಕ:2ನೇ ನವೆಂಬರ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ಸಾಗರ ಪೋಲೀಸ್ ಠಾಣೆ, ಶ್ರೀರಂಗಪಟ್ಟಣ ತಾಲ್ಲೂಕು ಇವರ ಅಪರಾಧ ಸಂಖ್ಯೆ:111/2007, ದಿನಾಂಕ:18-08-2007 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ: ಎಂವೈಓ-7755 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2009 ನೇ ಇಸವಿ ನವೆಂಬರ್ ತಿಂಗಳ 02ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1126

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/115/2007–08, ದಿನಾಂಕ:2ನೇ ನವೆಂಬರ್, 2009**

ಅಬಕಾರಿ ನಿರೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:05/2007–08, ದಿನಾಂಕ:14–02–2008

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಅಬಕಾರಿ ನಿರೀಕ್ಷಕರು ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ. | ಸಂತೋಷ್ ಬಿನ್ ವೆಂಕಟೇಶ್, ಸುಮಾರು 26 ವರ್ಷ, ಒಕ್ಕಲಿಗರ ಜನಾಂಗ, ಹಳೇಬೂದನೂರು ಗ್ರಾಮ, ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14–02–2008 ರಂದು ಮಧ್ಯಾಹ್ನ 02–00 ರ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಹಳೇಬೂದ ನೂರು ಗ್ರಾಮದ ಸಂತೋಷ್ ಬಿನ್ ವೆಂಕಟೇಶ್ ಎಂಬಾತನಿಗೆ ಸೇರಿದ ಗುಡಿಸಲು ಮನೆಗೆ ಹೊಂದಿಕೊಂಡಂತೆ ಇರುವ ಮೊಟ್ಟೆಗರಿ ನಿರ್ಮಿತ ದನದ ಕೊಟ್ಟಿಗೆಯಲ್ಲಿ ದಾಳಿ ನಡೆಸಿ ಅಕ್ರಮವಾಗಿ 4.860 ಲೀ ನಕಲಿ ಮದ್ಯ ಹಾಗೂ ನಕಲಿ ಮದ್ಯ ತಯಾರಿಕೆಗೆ ಬಳಸುತ್ತಿದ್ದ ವಸ್ತುಗಳನ್ನು ಜಪ್ತುಮಾಡುವ ಸಂದರ್ಭದಲ್ಲಿ ಸದರಿ ಸ್ಥಳದಲ್ಲಿ ದೊರೆತ ಬಜಾಜ್ ಚೇತಕ್ ಸ್ಕೂಟರ್‌ಗಳಾದ ಎಂವೈಸಿ–8023 ಮತ್ತು ಕೆಎ–09/ಇ2–49 ವಾಹನಗಳನ್ನು ಪಂಚಾನಾಮೆಯಡಿಯಲ್ಲಿ ಅಮಾನತ್ತು ಪಡಿಸಿಕೊಂಡು, ಮೇಲ್ಕಂಡ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 13(1)(ಎಫ್), 14,32,34, 38(ಎ), 43 ಮತ್ತು 43(ಎ) ರ ರೀತ್ಯಾ ಅಪರಾಧವಾದ್ದರಿಂದ ಪ್ರ.ಮಾ.ವ ಸಂಖ್ಯೆ:05/2007–08 ರಲ್ಲಿ ಮೊಕದ್ದಮೆ ದಾಖಲು ಮಾಡಿ, ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಸ್ತುಗಳನ್ನು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮದ್ಯದ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನಗಳು, ನಕಲಿ ಮದ್ಯ ಹಾಗೂ ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ: 22–12–2008 ರ ಪತ್ರದ ಮೂಲಕ ಕೋರಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಇವರು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–09/ಇ2–49 ವಾಹನದ ಮಾಲೀಕರ ವಿಳಾಸವು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಡ್ಯ ಇವರ ವ್ಯಾಪ್ತಿಗೆ ಬರುವುದರಿಂದ ಮುಂದಿನ ಮಾಹಿತಿಗಾಗಿ ಸದರಿಯವರನ್ನು ಸಂಪರ್ಕಿಸಲು ಸೂಚಿಸಿದ್ದರು. ಅದರಂತೆ ದಿನಾಂಕ:26–08–2009 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಡ್ಯ ಇವರಿಗೆ ಮೇಲ್ಕಂಡ ವಾಹನದ "ಬಿ" ವಹಿ ಕೋರಿ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಪ್ರಕರಣದಲ್ಲಿ ಜಪ್ತುಪಡಿಸಿರುವ ಮತ್ತೊಂದು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಎಂವೈಸಿ–8023 ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಈರಣ್ಣಗೌಡ ಬಿನ್ ಬೋರೇಗೌಡ, ನಂ.324, ಕೋಟೆ, ಚನ್ನರಾಯಪಟ್ಟಣ ಇವರು ವಾಹನದ ಮಾಲೀಕರೆಂದು ತಿಳಿದುಬಂದಿದ್ದು ಇವರು ವಾಹನದ ಮಾಲೀಕರೆಂಬುದು ತಿಳಿದು ಬಂದಿದ್ದು ಸದರಿ ಯವರಿಗೆ ದಿನಾಂಕ:29–08–2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 4.860 ಲೀ ನಕಲಿ ಮದ್ಯ, ಭದ್ರತಾ ಚೀಟಿಗಳು, ಪ್ಲಾಸ್ಟಿಕ್ ಕ್ಯಾನುಗಳು ಮತ್ತು ಇತರೆ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:24–12–2008 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್‌ಗಳಾದ ಎಂವೈಸಿ–8023 ಮತ್ತು ಕೆಎ–09/ಇ2–49 ವಾಹನಗಳನ್ನು ಅಕ್ರಮವಾಗಿ ನಕಲಿ ಮದ್ಯ ತಯಾರಿಸಿ, ಸಾಗಾಣಿಕೆ ಮಾಡಲು

ಬಳಸುತ್ತಿದ್ದುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (20) ತಿಂಗಳುಗಳಿಗೂ ಹೆಚ್ಚುಕಾಲ ಕಳೆದರೂ ಸಹ ಜಪ್ತುಪಡಿಸಿರುವ ವಾಹನಗಳನ್ನು ತನ್ನದೆಂದಾಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನಗಳ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನಗಳು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನಗಳ ಮಾಲೀಕರುಗಳ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನಗಳನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರು ವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನಗಳನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿವೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/115/2007–08, ದಿನಾಂಕ:2ನೇ ನವೆಂಬರ್, 2009**

ಡಾಃ ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:05/2007–08, ದಿನಾಂಕ:14–02–2008 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್‌ಗಳಾದ ಎಂವೈಸಿ–8023 ಮತ್ತು ಕೆಎ–09/ಇ2–49 ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2009 ನೇ ಇಸವಿ ನವೆಂಬರ್ ತಿಂಗಳ 02 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1128

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/192/2008–09, ದಿನಾಂಕ:2ನೇ ನವೆಂಬರ್, 2009**

ಅಬಕಾರಿ ಉಪ ನಿರೀಕ್ಷಕರು, ನಂ.1, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ:10/2008–09, ದಿನಾಂಕ:31–01–2009

**ಉಪಸ್ಥಿತರು:** ಡಾ: ವೈ.ಮಂಜುನಾಥ್

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು –1 ಮಂಡ್ಯ ವಲಯ, ಮಂಡ್ಯ. | ಸಂತೋಷ್ ಬಿನ್ ವೆಂಕಟೇಶ್, ಸುಮಾರು 26 ವರ್ಷ, ಒಕ್ಕಲಿಗರ ಜನಾಂಗ, ಹಳೇಬೂದನೂರು ಗ್ರಾಮ, ಮಂಡ್ಯ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31–01–2009 ರಂದು ಬೆಳಗ್ಗಿನ ಜಾವ 04–00 ರ ಸಮಯದಲ್ಲಿ ಮಂಡ್ಯ ತಾಲ್ಲೂಕಿನ ಹಳೇಬೂದ ನೂರು ಗ್ರಾಮದ ಸಂತೋಷ್ ಬಿನ್ ವೆಂಕಟೇಶ್ ಎಂಬಾತನಿಗೆ ಸೇರಿದ ಗುಡಿಸಲಿನ ಪಕ್ಕದಲ್ಲಿರುವ ಖಾಲಿ ಜಾಗದಲ್ಲಿ ಅಕ್ರಮವಾಗಿ ಬಿಳಿಬಣ್ಣದ ಮಾರುತಿ 800 ಕಾರು ಸಂಖ್ಯೆ: ಕೆಎ–03/ಜೆಡ್–6705 ರಲ್ಲಿ 70.000 ಲೀ ಮದ್ಯಸಾರದ ಜೊತೆ ನಕಲಿ ಮದ್ಯ ತಯಾರು ಮಾಡಲು ಬಳಸುವ ವಸ್ತುಗಳಾದ ಕೆರಾಮಲ್ ಮತ್ತು ಇತರೇ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು, ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13(ಎಫ್), 14, 32, 34, 38(ಎ), 43 ಮತ್ತು 43(ಎ) ರೀತ್ಯಾ ಅಪರಾಧ ವಾದ್ದರಿಂದ ಮೇಲ್ಕಂಡ ವಾಹನ, ಮದ್ಯಸಾರ

ಮತ್ತು ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಪಂಚನಾಮೆ ಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಪ್ರ.ಮಾ.ವ ಸಂಖ್ಯೆ:10/2008-09 ರಲ್ಲಿ ಮೊಕದ್ದಮೆ ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯಸಾರ ಮತ್ತು ಕೆರಾಮಲ್ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕೆರಾಮಲ್ ಕಂಡು ಬಂದಿದ್ದು, ಅವು ಮಾನವನ ಸೇವನೆಗೆ ಬಳಸಬಹುದಾದ ಮದ್ಯವನ್ನು ತಯಾರಿಸಲು ಯೋಗ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ, ಮದ್ಯಸಾರ ಹಾಗೂ ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:07-03-2009 ಮತ್ತು 24-04-2009 ರ ಪತ್ರಗಳ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮದ್ಯಸಾರ, ಕೆರಾಮಲ್ ಮತ್ತು ನಕಲಿ ಮದ್ಯ ತಯಾರಿಸಲು ಬಳಸುವ ಇತರೇ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:28-04-2009 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಮಾರುತಿ 800 ಕಾರು ಸಂಖ್ಯೆ: ಕೆಎ-03/ಜೆ-6705 ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಇಂದಿರಾನಗರ, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಹೊನಮುರುಗನ್ ಬಿನ್ ಮುರಗನ್, ನಂ.41, ಇಬೆನ್ಜೀರ್ ಕಾಟೇಜ್, ವಿನಾಯಕ ಲೇ ಔಟ್, ಕೃಷ್ಣನಗರ, ಚಿಕ್ಕದೇವಸಂದ್ರ, ಬೆಂಗಳೂರು-36 ಇವರು ವಾಹನದ ಮಾಲೀಕರೆಂದು ಹಾಗೂ ವಾಹನದ ಕಡತಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೆ.ಆರ್.ಪುರಂ ಇವರಿಗೆ ಕಳುಹಿಸಿರುವುದು ತಿಳಿದುಬಂದಿರುತ್ತದೆ. ಆದಾಗ್ಯೂ ಶ್ರೀ ಹೊನಮುರು ಗನ್ ಬಿನ್ ಮುರಗನ್, ಇವರಿಗೆ ದಿನಾಂಕ:27-02-2009 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಹಿಂತಿರುಗಿ ಬಂದಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೆ.ಆರ್.ಪುರಂ, ಬೆಂಗಳೂರು ಇವರು ಮಾರುತಿ 800 ಕಾರು ಸಂಖ್ಯೆ: ಕೆಎ-03/ಜೆಡ್-6705 ವಾಹನದ ತೀರುವಳಿ ಪತ್ರವನ್ನು ದಿನಾಂಕ:13-03-2006 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೋಲಾರ ಇವರಿಗೆ ನೀಡಿರುವುದರಿಂದ, ಪ್ರಸ್ತಾಪಿತ ವಾಹನದ ಪ್ರಸ್ತುತ ವಿವರವನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಲಾರ ಇವರ ಕಛೇರಿಯಿಂದ ಪಡೆಯುವಂತೆ ಸೂಚಿಸಿರುತ್ತಾರೆ.

ಅದರಂತೆ ದಿನಾಂಕ:29-04-2009, 01-06-2009, 13-08-2009 ಮತ್ತು 12-10-2009 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಲಾರ ಜಿಲ್ಲೆ ಇವರಿಗೆ ಮೇಲ್ಕಂಡ ವಾಹನದ "ಬಿ" ವಹಿ ಕೋರಿ ಪತ್ರ ಬರೆಯಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ:ಕೆಎ-03/ ಜೆಡ್-6705 ವಾಹನದಲ್ಲಿ ದಿನಾಂಕ: 31-01-2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳುಗಳಿಗೂ ಹೆಚ್ಚುಕಾಲ ಕಳೆದರೂ ಸಹ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದಾಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವ ವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಠಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/192/2008-09, ದಿನಾಂಕ:2ನೇ ನವೆಂಬರ್, 2009**

ಡಾ: ವೈ.ಮಂಜುನಾಥ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು

ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು ನಂ.1, ಮಂಡ್ಯ ವಲಯ, ಮಂಡ್ಯ ಇವರ ಪ್ರ.ಮಾ.ವ ಸಂಖ್ಯೆ: 10/2008-09, ದಿನಾಂಕ:31-01-2009 ರ ಪ್ರಕರಣದಲ್ಲಿ ಜಪ್ತು ಪಡಿಸಿರುವ ಮಾರುತಿ 800 ಕಾರು ಸಂಖ್ಯೆ:ಕೆಎ-03/ ಜೆಡ್-6705 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2009 ನೇ ಇಸವಿ ನವೆಂಬರ್ ತಿಂಗಳ 02ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.1124

## ಮಾರಾಟಾಧಿಕಾರಿ ಚಿಕ್ಕಮಗಳೂರು, ಪಟ್ಟಣ ಸಹಕಾರ ಬ್ಯಾಂಕ್ ನಿ., ಚಿಕ್ಕಮಗಳೂರು

**ಫಾರಂ ನಂ.7**

**[38ನೆಯ ರೂಲು(2)(ಸಿ)]**

**ಸಿ.ಇ.ಪಿ.ನಂ.ಎ.ಆರ್.ಇ/ಯು.ಬಿ.ಎಫ್/7941/2005/2006**

**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸು**

ಚಿಕ್ಕಮಗಳೂರು ಜಿಲ್ಲಾ ಚಿಕ್ಕಮಗಳೂರು ತಾಲ್ಲೂಕಿನ ರತ್ನಗಿರಿ ರಸ್ತೆಯ ಪಶ್ಚಿಮ ಸಾಲಿನಲ್ಲಿರುವ (ದೇವೇಗೌಡ ಸರ್ಕಲ್ ಎದುರು) ಶ್ರೀಮತಿ ಸಿ.ಸಿ. ರತ್ನಮ್ಮ ಕೋಂ ಲೇ. ಸಿ.ಸಿ. ಸೋಮಶೇಖರಯ್ಯ ಇವರಿಗೆ ಕೊಡುವ ಜಪ್ತಿ ನೋಟೀಸ್ ನಂಬರು ಎ.ಆರ್.ಇ/ಯು.ಬಿ.ಎಫ್/7941/2005/2006ನೇ ಚಿಕ್ಕಮಗಳೂರು ಪಟ್ಟಣ ಸಹಕಾರ ಬ್ಯಾಂಕ್ ನಿ., ಇದಕ್ಕೆ ಸದರಿ ಹಣ ರೂ.1,88,911.00 ಯನ್ನು ಈ ವರೆಗೆ ನೀವು ಕೊಡದೇ ಇರುವ ಕಾರಣದಿಂದಲೂ ವ ಕೊಡಲಿಕ್ಕೆ ತಪ್ಪಿದ ಕುರಿತು ತಕ್ಕವಾದ ಕಾರಣಗಳನ್ನು ಕೊಡದೇ ಇದ್ದುದ್ದರಿಂದಲೂ ನಿಮ್ಮ ಹಕ್ಕಿನ ಈ ಕೆಳಗೆ ಕಾಣಿಸಿದ ಸ್ಥಿರ ಸ್ವತ್ತುಗಳು ಜಪ್ತಿ ಮಾಡಲ್ಪಟ್ಟಿವೆ ಎಂಬುದಾಗಿ ನಿಮಗೆ ಈ ಮೂಲಕ ತಿಳಿಸೋಣವಾಗುತ್ತದೆ ಮತ್ತು ಬಾಕಿ ಹಣವನ್ನು ತಾ:15.11.2009ರ ಒಳಗೆ ಬಡ್ಡಿ ವ ಇತರ ಖರ್ಚು ಸಮೇತ ಪಾವತಿ ಮಾಡದೇ ಇದ್ದರೆ ಕಾನೂನು ಪ್ರಕಾರ ಸದರಿ ಸ್ಥಿರ ಸ್ವತ್ತುಗಳು ಮಾರಾಟ ಮಾಡಲ್ಪಡುವುವು.

**ಸ್ಥಿರ ಸ್ವತ್ತುಗಳ ಯಾದಾಸ್ತು**

ಚಿಕ್ಕಮಗಳೂರು ನಗರದ ರತ್ನಗಿರಿ ರಸ್ತೆಯಲ್ಲಿರುವ ಮು.ಅ.ನಂ.8544/6517ರಲ್ಲಿರುವ ಎರಡು ಅಂತಸ್ತು ಆರ್.ಸಿ.ಸಿ. ಕಟ್ಟಡ- ಅಂಗಡಿ ಮಳಿಗೆಗಳು ವಿಸ್ತೀರ್ಣ $\frac{52+67}{2} \times \frac{26+24}{2}$ 4071 ಇದರ

**ಚಕ್ಕುಬಂದಿ:** ಪೂರ್ವಕ್ಕೆ: ರತ್ನಗಿರಿ ರಸ್ತೆ
ಪಶ್ಚಿಮಕ್ಕೆ: ಶ್ರೀ ಸ್ವಾಮಿ ಮತ್ತು ಮೂರ್ತಿರವರಿಗೆ ಸೇರಿದ ಸ್ವತ್ತು
ಉತ್ತರಕ್ಕೆ : ಶ್ರೀ ಸಿ.ಸಿ. ಚಂದ್ರಶೇಖರ್ ರವರಿಗೆ ಸೇರಿದ ಸ್ವತ್ತು
ದಕ್ಷಿಣಕ್ಕೆ: ವಿಜಯಪುರ ಮುಖ್ಯ ರಸ್ತೆ.

ಮೊಕ್ಕಾಂ ಚಿಕ್ಕಮಗಳೂರು
ತಾರೀಖು:29.10.2009

**ಸೂಚನೆ:** ತಗಾದೆ ಪತ್ರವನ್ನು ಜಾರಿ ಮಾಡುವಂತೆಯೇ ಈ ನೋಟೀಸನ್ನು ಜಾರಿ ಮಾಡುವುದು.

ಮಾರಾಟಾಧಿಕಾರಿ, ಚಿಕ್ಕಮಗಳೂರು
ಪಟ್ಟಣ ಸಹಕಾರ ಬ್ಯಾಂಕ್ ನಿ.,
ಚಿಕ್ಕಮಗಳೂರು.

ಪಿಡಿ.72

## IN THE COURT OF THE PRL.CIVIL JUDGE (JR.DN) & JMFC, ANEKAL

**DATED17TH DAY OF NOVEMBER, 2009**

It is hereby notified for the information of the public that the under mentioned two wheeler vehicles, which are in the custody of this court have unclaimed shall be confiscated to the Government and disposed to law, if not claimed by the owner with proof of ownership within six months from the Date of the publication of notification.

| Sl. No. | C.Mis No. | PF No. | Vehicle No. | Engg & Cha.No. | Nature of property |
|---|---|---|---|---|---|
| 1. | C.Mis.3/2000 | PF.12/200 | CAP-4676 | | Enfiled |
| 2. | C.Mis.3/2000 | PF.12/200 | MEX-7009 | | Rajdoot |

| Sl. No. | C.Mis No. | PF No. | Vehicle No. | Engg & Cha.No. | Nature of property |
|---|---|---|---|---|---|
| 3. | C.Mis.3/2000 | PF.12/200 | MEX-8328 | | Ezdi |
| 4. | C.Mis.3/2000 | PF.12/200 | - | 06276561 | Rajdoot |
| 5. | C.Mis.3/2000 | PF.12/200 | | A901F169073 | TVS-50 |
| 6. | C.Mis.3/2000 | PF.12/200 | CKN-6745 | | TVS-50 |
| 7. | C.Mis.3/2000 | PF.12/200 | KA-01-K-1168 | | TVS Champ |
| 8. | C.Mis.3/2000 | PF.12/200 | | 0906F221607 | TVS-50 |
| 9. | C.Mis.3/2000 | PF.12/200 | | A107F508233 | TVS-50 |
| 10. | C.Mis.3/2000 | PF.12/200 | TV-29-5389 | | TVS-50 |
| 11. | C.Mis.3/2000 | PF.12/200 | CAV-7828 | | TVS-50 |
| 12. | C.Mis.3/2000 | PF.12/200 | | A911F317541 | TVS-50 |
| 13. | C.Mis.3/2000 | PF.12/200 | | A305F753468 | TVS-50 |
| 14. | C.Mis.3/2000 | PF.12/200 | CNN-9692 | | TVS-50 |
| 15. | C.Mis.3/2000 | PF.12/200 | | 0103E671398 | TVS-Champ |
| 16. | C.Mis.3/2000 | PF.12/200 | KA-05-Q-6167 | | TVS-50 |
| 17. | C.Mis.3/2000 | PF.12/200 | MES-1510 | | Rajdoot |
| 18. | C.Mis.3/2000 | PF.12/200 | TDD-8061 | | Yezdi |
| 19. | C.Mis.3/2000 | PF.12/200 | CKJ-4529 | | TVS-50 |
| 20. | C.Mis.3/2000 | PF.12/200 | CAM-7853 | | Bajaj Chetak |
| 21. | C.Mis.3/2000 | PF.12/200 | KA-05-7758 | | TVS-50 |
| 22. | C.Mis.3/2000 | PF.12/200 | KA-03-EC-5854 | | Hero Honda |
| 23. | C.Mis.3/2000 | PF.12/200 | TN-29-S-7501 | | TVS-50 |
| 24. | C.Mis.3/2000 | PF.12/200 | KA-03-Q-6521 | | Bajaj Chethak |
| 25. | C.Mis.3/2000 | PF.12/200 | KA-05-L-9301 | | Bajaj Chetak |
| 26. | C.Mis.3/2000 | PF.12/200 | TN-29-X-6071 | | Hero Honda |
| 27. | C.Mis.3/2000 | PF.12/200 | | | Yezdi |
| 28. | C.Mis.3/2000 | PF.12/200 | CAH-6243 | | Bajaj Chetak |

Prl. Civil Judge (Jr.Dn.)
& J.M.F.C. Anekal.

PR-1247

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**
**ಪ್ರಕಟಣೆ: ಕಾಅಕೊ/ ಕಾನಪ/ಮ.ಪ್ರ/ಸಂಖ್ಯೆ–155/2009, ದಿನಾಂಕ:30ನೇ ನವೆಂಬರ್, 2009**

**ಅರ್ಜಿದಾರರು**

1) ಶ್ರೀಮತಿ ಅಕ್ತಾರ್ ಬಾನು ಗಂಡ: ಜೆ. ಹುಸ್ಸೇನ್‌ಸಾಬ್, 40 ವರ್ಷ,
2) ಮೊಹಮ್ಮದ್ ರಫೀಕ್ ಜಿ. ತಂದೆ ಲೇಟ್ ಜಿ. ಹುಸೇನ್‌ಸಾಬ್, 17 ವರ್ಷ.
3) ಲಾಲುಸಾಬ್ ತಂದೆ ಲೇಟ್ ಜಿ. ಹುಸೇನ್ ಸಾಬ್, 14 ವರ್ಷ, ಎಸ್.ಆರ್. ನಗರ, 7ನೇ ವಾರ್ಡ್, 81 ರೆಹಮಾನ್ ಸಾಬ್ ಮನೆ ಹತ್ತಿರ, ಹೊಸಪೇಟೆ, ಸಾ: ಎಂ.ಡಿ. ಇಸ್ಮಾಯಿಲ್ ಸಿಂಡಿಕೇಟ್ ಬ್ಯಾಂಕ್ ಹತ್ತಿರ, ಮುನಿರಾಬಾದ್, R/s. ಹುಲಿಗೆ (ಪೋ), ತಾ:ಜಿ: ಕೊಪ್ಪಳ.

**ವಿರುದ್ಧ**

**ಪ್ರತಿವಾದಿಗಳು**

1) ಮೈನುದ್ದೀನ್ ತಂದೆ ಶೇಖ್ ಹುಸೇನ್, 43 ವರ್ಷ, ಮುಸ್ಲಿಂ, ಸಾ: ಎಸ್.ಎಲ್. 9ನೇ ವಾರ್ಡ್, ಡಿ.ನಂ.852, ಹೊಸಪೇಟೆ, ಜಿ: ಬಳ್ಳಾರಿ.
2) ದಿ ಮ್ಯಾನೇಜರ್ ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಸ್ಟೇಷನ್ ರೋಡ್, ಯಲಮಂಚಲಿ ಕಾಂಪ್ಲೆಕ್ಸ್, ಹೊಸಪೇಟೆ.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಜಿ. ಹುಸ್ಸೇನ್ ಸಾಬ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:07.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಜಿ. ಹುಸ್ಸೇನ್ ಸಾಬ್ ಇವರ ವಾರಸುದಾರರಾದ ಶ್ರೀಮತಿ (1) ಅಕ್ತಾರ್‌ಬಾನು (2) ಮೊಹಮ್ಮದ್ ರಫೀಕ್ (3) ಲಾಲುಸಾಬ್ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.1246

**ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ**

**ಸಂಖ್ಯೆ:ಇ2/ಪ್ರಾಶಾಶಿ/ಅಗೈರ/ಬಿಎಸ್/26/2009–10, ದಿನಾಂಕ:24ನೇ ನವೆಂಬರ್, 2009**

**ಅಂತಿಮವಾಗಿ ಎರಡನೇಯ ನೋಟೀಸು**

**ವಿಷಯ:** ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿರುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಧಾರವಾಡ ಗ್ರಾ. ಇವರ ಪತ್ರ ಸಂಖ್ಯೆ:ಎ1:ಪ್ರಾಶಾಶಿ:ಅಗೈರು:ಆರ್‌ಎಸ್‌ಜಿ: 2008–09:194: ದಿನಾಂಕ:22.06.2009.

2) ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:09.09.2009.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖದನ್ವಯ ಶ್ರೀಮತಿ ಬಿ. ಸುಶೀಲಾ ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬೆಣಚಿ ತಾ:ಜಿ:ಧಾರವಾಡ ಆದ ನೀವು ದಿನಾಂಕ:17.03.2003 ರಿಂದ ದಿನಾಂಕ:26.03.2003 ರವರೆಗೆ ಪ್ರಸೂತಿ ರಜೆ ಮೇಲೆ ಹೋದವರು ನಂತರ ಶಾಲೆಗೆ ಹಾಜರಾಗದೇ ದಿನಾಂಕ:27.03.2003 ರಿಂದ ದಿನಾಂಕ:30.09.2003 ರವರೆಗೆ ವೈದ್ಯಕೀಯ ಆಧಾರದ ಮೇಲೆ ರಜೆ ಮಂಜೂರಿಸಲು ಅರ್ಜಿ ಸಲ್ಲಿಸಿದ್ದು, ನಂತರ ದಿನಾಂಕ:01.10.2003 ರಿಂದ ಯಾವುದೇ ರಜೆ ಅರ್ಜಿಯನ್ನು ನಿಮ್ಮ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳವರಿಗೆ ಸಲ್ಲಿಸದೇ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರ ಉಳಿದಿದ್ದೀರಿ. ಈ ಕುರಿತು ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಮಗೆ ದಿನಾಂಕ:18.03.2004 ರಂದು ಶಾಲಾ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡಿ ನೋಟೀಸ್ ಜಾರಿ ಮಾಡಿದ್ದರು. ನಂತರ ಅಂತಿಮವಾಗಿ ದಿನಾಂಕ:11.07.2004 ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ:14.07.2004 ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರು. ಆಗ ನೀವು ಮನವಿ ಸಲ್ಲಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿರುವಂತೆ ನಿಮಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ವೈದ್ಯಕೀಯ ಮಂಡಳಿಯ ಪರೀಕ್ಷಾ ವರದಿಯ ಷರಾದಲ್ಲಿನ ಅಂಶದ ಷರತ್ತಿಗೆ ಒಳಪಟ್ಟು ಸೇವೆಗೆ ಹಾಜರಾಗಲು ಅನುಮತಿ ನೀಡಿ, ಅನುಮತಿ ಆದೇಶವನ್ನು ನಿಮ್ಮ ಮನೆಗೆ ಸಿಬ್ಬಂದಿಯವರು ಖುದ್ದಾಗಿ ಬಂದು ತಲುಪಿಸಿರುವರು. ಆದರೂ ನೀವು ಈವರೆಗೂ ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆ ನಂತರ ಈ ಕಛೇರಿಯಿಂದ ಉಲ್ಲೇಖ 1 ರಂತೆ ಅಂತಿಮ ನೋಟೀಸು ಒಂದು ಬಾರಿ ಕಳುಹಿಸಿದರೂ ನೀವು ಸೇವೆಗೆ ಹಾಜರಾಗಿರುವುದಿಲ್ಲ. ಇದರಿಂದಾಗಿ ನೀವು ಸೇವೆಯಲ್ಲಿ ನಿಷ್ಕಾಳಜಿ, ನಿರ್ಲಕ್ಷತನ ಹಾಗೂ ಅವಿಧೇಯತೆ ತೋರಿರುವುದು ಕಂಡುಬರುತ್ತದೆ. ಇದರಿಂದಾಗಿ ನೀವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ಹಾಗೂ 162ನ್ನು ಉಲ್ಲಂಘಿಸಿದ್ದೀರಿ ಎಂದು ಭಾವಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪಖಂಡ (VII) ರ ಅಡಿ ಸೇವೆಗೆ ಅನಧಿಕೃತ ಗೈರು ಉಳಿದ ದಿನದಿಂದಲೇ ಅಂದರೆ ದಿನಾಂಕ:01.10.2003 ರಿಂದ ಜಾರಿಗೆ ಬರುವಂತೆ ನಿಮ್ಮನ್ನು ಸೇವೆಯಿಂದ ವಜಾಗೊಳಿಸಲು ಉಲ್ಲೇಖ 1 ರ ಪತ್ರದಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅನುಮತಿ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ನಿಮಗೆ ಈ ಮೂಲಕ ಅಂತಿಮವಾಗಿ ತಿಳಿಸುವುದೇನೆಂದರೆ ಈ ಅಂತಿಮ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ನೀವು ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿದೆ. ಆದಾಗ್ಯೂ ನೀವು ಸೇವೆಗೆ ಹಾಜರಾಗದಿದ್ದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಮ್ಮನ್ನು ನೀವು ಸೇವೆಗೆ ಅನಧಿಕೃತ ಗೈರು ಉಳಿದಿರುವ ದಿನಾಂಕ:01.10.2003 ರಿಂದಲೇ ಜಾರಿಗೆ ಬರುವಂತೆ ನಿಯಮಾನುಸಾರ ಸೇವೆಯಿಂದ ವಜಾ ಮಾಡಲು ಕ್ರಮ ವಹಿಸಲಾಗುವುದು ಎಂದು ಈ ಮೂಲಕ ಸೂಚಿಸಲಾಗಿದೆ.

ಉಪನಿರ್ದೇಶಕರು (ಆಡಳಿತ),
ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

ಪಿ.ಆರ್.1248

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ:ಕಾಅತು:ಕಾಪಕಾ:ಎಫ್‌ಸಿ:ಸಿಆರ್–54/09, ದಿನಾಂಕ:21ನೇ ನವೆಂಬರ್, 2009**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ರುಸ್ತುಂ ಸಾಬ್ ಮಲ್ಲಿಕ್ ಸಾಬ್ ನಿಲಗಿರಿ @ ರುಸ್ತುಂ ಸಾಬ್ದ ತಂದೆ: ಮಲ್ಲಿಕ್ ಸಾಬ್, ವಯಸ್ಸು ಸುಮಾರು 65 ವರ್ಷ,<br>2) ಜೈತುನ್‌ಬಿ ವೈಫ್:ಆಫ್ ರುಸ್ತುಂ ಸಾಬ್ ಮಲ್ಲಿಕ್ ಸಾಬ್ ನಿಲಗಿರಿ, ವಯಸ್ಸು: ಸುಮಾರು 58 ವರ್ಷ.<br>ವಿಳಾಸ: ತಗ್ಗಿಹಳ್ಳಿ, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ. | **ವಿರುದ್ಧ** | 1) ರಾಯಪ್ಪ @ ರಾಯಗೌಡ 1ನೇ ದರ್ಜೆ ಗುತ್ತಿಗೆದಾರರು, ಪಿಡಬ್ಲ್ಯೂಡಿ. ವಾಸ: ಸರ್ಕಾರಿ ಆಸ್ಪತ್ರೆ ರಸ್ತೆ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ.<br>2) ಅಮ್‌ಜೆದ್ ತಂದೆ: ಜನಾಬ್ ಪ್ಯಾರು, ವಯಸ್ಸು: ಪ್ರಾಪ್ತರು, ವಾಸ ನಂ.1773, ಸೇಠ್ ಗಲ್ಲಿ, ಅಬ್ಬಾಸ್ ರಸ್ತೆ, ಲಷ್ಕರ್ ಮೊಹಲ್ಲಾ, ಮೈಸೂರು. |

**ಪ್ರಕಟಣೆ**

ಅರ್ಜಿದಾರರ ಮಗ ಮೃತ ರಹಮಾನ್ ಸಾಬ್ ಇವರು ಪ್ರತಿವಾದಿಗಳ ಬಳಿ ಕೂಲಿ/ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:23.01.2008ರಂದು ಮಧುಗಿರಿ ತಾಲ್ಲೂಕು ಹುಣಸವಾಡಿ ರಸ್ತೆಗೆ ಟಾರ್ ಹಾಕುವಾಗ ಆದ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂ:ಕಾಅತು:ಕಾಪಕಾ:ಎಫ್‌ಸಿ:ಸಿಆರ್–57/09, ದಿನಾಂಕ:21ನೇ ನವೆಂಬರ್, 2009**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಪಾಪಮ್ಮ @ ಲಕ್ಷ್ಮಮ್ಮ ವೈಫ್‌ಆಫ್ ಲೇಟ್ ಶಂಕರಪ್ಪ @ ಬಿ.ರಾಜು.<br>ವಯಸ್ಸು: ಸುಮಾರು 50 ವರ್ಷ,<br>ವಾಸ: ತೀರ್ಥಗಿರಿ ನಿಲಯ ಬಿಹೈಂಡ್ ಸಪ್ತಗಿರಿ ಎಕ್ಸ್‌ಟೆನ್‌ಷನ್, ಶಿರಾ ಟೌನ್, ತುಮಕೂರು ಜಿಲ್ಲೆ. | **ವಿರುದ್ಧ** | 1) ರಮೇಶ್ ತಂದೆ: ಮುನಿಸ್ವಾಮಪ್ಪ ಹೆಚ್.ಎನ್. ವಯಸ್ಸು ಸುಮಾರು, 40 ವರ್ಷ, ವಾಸ: #35, ಬಂಡೆ ಹೊಸೂರು, ಬೇಗಲೂರು ಮೇನ್ ರೋಡ್, ಬೆಂಗಳೂರು, ಕರ್ನಾಟಕ.<br>2) ಐ.ಸಿ.ಐ.ಸಿ.ಐ. ಲೊಂಬಾರ್ಡ್ ಜನರಲ್ ಇನ್‌ಷ್ಯೂರೆನ್ಸ್ ಕಂ. ಪ್ರೆಸ್ಟೀಜ್ ಕಾರ್ನಿಕ, 62/1, 2ನೇ ಮಹಡಿ, ರಿಚ್‌ಮಂಡ್ ರೋಡ್, ಬೆಂಗಳೂರು–560026. |

**ಪ್ರಕಟಣೆ**

ಅರ್ಜಿದಾರರ ಮಗ ಮೃತ ಗೋವಿಂದರಾಜ @ ರಾಜಾ @ಆರ್.ರಾಜಾ ಇವರು 1ನೇ ಪ್ರತಿವಾದಿಗಳ ಬಳಿ 1ನೇ ಪ್ರತಿವಾದಿಗಳಿಗೆ ಸಂಬಂಧಪಟ್ಟ ಜೆಸಿಬಿ ಕೆಎ–02–ಎ–7011 ವಾಹನದಲ್ಲಿ ಡ್ರೈವರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:18.08.2009 ರಂದು ಆಧ ಅಪಘಾತದಿಂದಾದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ

ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂ:ಕಾಅತು:ಕಾಪಕಾ:ಸಿಆರ್–59/09, ದಿನಾಂಕ:21ನೇ ನವೆಂಬರ್, 2009**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಟಿ.ಎಸ್. ಪರಮೇಶ್ವರಾಚಾರ್ ವಯಸ್ಸು: 58 ವರ್ಷ,<br>2) ಶ್ರೀಮತಿ ಸರ್ವಮಂಗಳ ಕೋಂ ಟಿ.ಎಸ್. ಪರಮೇಶ್ವರಾಚಾರ್, ವಯಸ್ಸು: 42 ವರ್ಷ,<br>3) ಟಿ.ಪಿ. ಸುರೇಶ ಕುಮಾರ್ ತಂದೆ: ಟಿ.ಎಸ್. ಪರಮೇಶ್ವರಾಚಾರ್, ವಯಸ್ಸು: 28 ವರ್ಷ.<br>ವಿಳಾಸ: 7ನೇ ಅಡ್ಡರಸ್ತೆ, ಮಹಾಲಕ್ಷ್ಮಿ ನಗರ, ಬಟವಾಡಿ, ತುಮಕೂರು. | **ವಿರುದ್ಧ** | ವಿಭಾಗೀಯ ನಿಯಂತ್ರಣಾಧಿಕಾರಿಗಳು ಕರ್ನಾಟಕ ರಾಜ್ಯ ರಸ್ತೆ, ಸಾರಿಗೆ ಸಂಸ್ಥೆ, ತುಮಕೂರು ವಿಭಾಗ, ತುಮಕೂರು. |

**ಪ್ರಕಟಣೆ**

ಅರ್ಜಿದಾರರ ಮಗ ಹೇಮಂತ ಕುಮಾರ್ ಇವರು ಪ್ರತಿವಾದಿಗಳಿಗೆ ಸಂಬಂಧಪಟ್ಟ ಸಂಸ್ಥೆಯ ತುಮಕೂರು ಘಟಕದಲ್ಲಿ ಟ್ರೈನಿ ಚಾಲಕರಾಗಿ, ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:22.10.2009ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ಮೃತ ಅವಲಂಬಿತರಿಗೆ ವಿತರಿಸಲು ಪರಿಹಾರ ಮೊತ್ತ ರೂ.2,93,888–00 ಗಳನ್ನು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, 916–ಗಂಗೋತ್ರಿನಗರ, ಎಸ್.ಐ.ಟಿ. ಬ್ಯಾಕ್, ತುಮಕೂರು ಜಿಲ್ಲೆ, ತುಮಕೂರು**
**ಸಂ:ಕಾಅತು:ಕಾಪಕಾ:ಎಫ್‌ಸಿ:ಸಿಆರ್–60/09, ದಿನಾಂಕ:23ನೇ ನವೆಂಬರ್, 2009**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ನಂಜುಂಡಯ್ಯ ತಂದೆ: ರಂಗಪ್ಪ ವಯಸ್ಸು:55 ವರ್ಷ.<br>2) ಕೆಂಪದೇವಮ್ಮ ವೈಫ್:ಆಫ್ ನಂಜುಂಡಯ್ಯ, 50 ವರ್ಷ.<br>3) ಕಾಂತರಾಜು ತಂದೆ: ನಂಜುಂಡಯ್ಯ, ವಯಸ್ಸು:25 ವರ್ಷ.<br>ಎಲ್ಲರ ವಿಳಾಸ: ತಲಕೆರೆ, ತುರುವೇಕೆರೆ ತಾಲ್ಲೂಕು, ಈಗಿನ ವಿಳಾಸ.<br>ಶಾಂತಿನಗರ, ಕಸಬಾ ಹೋಬಳಿ, ತುಮಕೂರು ತಾಲ್ಲೂಕು. | **ವಿರುದ್ಧ** | 1) ನರಸಿಂಹಮೂರ್ತಿ ತಂದೆ: ರಾಮಣ್ಣ, ವಯಸ್ಸು:41 ವರ್ಷ,<br>ವಾಸ: # 114, 2ನೇ ಮೈನ್‌ರೋಡ್, ರಾಮಚಂದ್ರಪುರಂ, ಬೆಂಗಳೂರು–560021.<br>2) ದಿ ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ನಂ.40 ಲಕ್ಷ್ಮಿ ಕಾಂಪ್ಲೆಕ್ಸ್ ಕೆ.ಆರ್. ರೋಡ್, ಬೆಂಗಳೂರು.<br>ಸರ್ವಿಸ್ ಅಡ್ರೆಸ್:<br>ದಿ ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ವಿವೇಕಾನಂದ ರಸ್ತೆ, ತುಮಕೂರು. |

**ಪ್ರಕಟಣೆ**

ಅರ್ಜಿದಾರರ ಮಗನಾದ ಚಂದ್ರಶೇಖರ್ ಇವರು 1ನೇ ಪ್ರತಿವಾದಿಗಳ ಲಾರಿ ಸಂಖ್ಯೆ: ಟಿಎನ್–04–ಎಮ್–4979 ಲಾರಿಯಲ್ಲಿ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:06.02.2009 ಬೆಳಗಿನ ಜಾವ 2.45 ಗಂಟೆಗೆ ಸಮಯದಲ್ಲಿ ಮಂಡ್ಯದಲ್ಲಿ ನಾಗಮಂಗಲ ರಸ್ತೆಯಲ್ಲಿ ಬೇಬಿಗೇಟ್ ಹತ್ತಿರ ಆದ ಅಪಘಾತದಲ್ಲಿ ಆದ ಗಾಯಗಳ ಪರಿಣಾಮವಾಗಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.1253

**ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ**

**ಸಂಖ್ಯೆ:ಇ2/ಪ್ರಾಶಾಶಿ/ಅಗೈರ/ಆರ್ಎಸ್‌ಜಿ/25/2009–10, ದಿನಾಂಕ:24ನೇ ನವೆಂಬರ್, 2009**

**ಅಂತಿಮವಾಗಿ ಎರಡನೇಯ ನೋಟೀಸು**

**ವಿಷಯ:** ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದಿರುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಧಾರವಾಡ ಗ್ರಾ. ಇವರ ಪತ್ರ ಸಂಖ್ಯೆ:ಎ1:ಪ್ರಾಶಾಶಿ:ಅಗೈರು:ಆರ್ಎಸ್‌ಜಿ: 2008–09:194: ದಿನಾಂಕ:22.06.2009.

2) ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:09.09.2009.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖದನ್ವಯ ಶ್ರೀ ಆರ್.ಎಸ್. ಗಾಯಕವಾಡ ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಲೂರ ತಾ:ಜಿ:ಧಾರವಾಡ ಆದ ನೀವು ದಿನಾಂಕ:06.06.2008 ರಿಂದ ಇಲ್ಲಿಯವರೆಗೂ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರು ಉಳಿದ್ದೀರಿ. ಈ ಕುರಿತು ಕ್ಷೇತ್ರ ಶಿಕ್ಷಣಾಧಿಕಾರಿಗಳು ನಿಮಗೆ ದಿನಾಂಕ:15.09.2008, ದಿನಾಂಕ:31.10.2008, ದಿನಾಂಕ:22.12.2008 ಮತ್ತು ದಿನಾಂಕ:12.01.2009ರ ಪತ್ರದಂತೆ ಶಾಲಾ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡಿ ನೋಟೀಸ್ ಜಾರಿ ಮಾಡಿದ್ದರು, ಹಾಗೂ ಅಂತಿಮವಾಗಿ ದಿನಾಂಕ:04.04.2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರು. ಆದರೂ ನೀವು ಈ ವರೆಗೂ ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆ ನಂತರ ಈ ಕಛೇರಿಯಿಂದ ಉಲ್ಲೇಖ 1ರಂತೆ ಅಂತಿಮ ನೋಟೀಸು ಒಂದು ಬಾರಿ ಕಳುಹಿಸಿದರೂ ನೀವು ಸೇವೆಗೆ ಹಾಜರಾಗಿರುವುದಿಲ್ಲ. ಇದರಿಂದಾಗಿ ನೀವು ಸೇವೆಯಲ್ಲಿ ನಿಷ್ಕಾಳಜಿ, ನಿರ್ಲಕ್ಷತನ ಹಾಗೂ ಅವಿಧೇಯತೆ ತೋರಿರುವುದು ಕಂಡುಬರುತ್ತದೆ. ಇದರಿಂದಾಗಿ ನೀವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ನ್ನು ಉಲ್ಲಂಘಿಸಿದ್ದೀರಿ ಎಂದು ಭಾವಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪಖಂಡ (VII) ರ ಅಡಿ ಸೇವೆಗೆ ಅನಧಿಕೃತ ಗೈರು ಉಳಿದ ದಿನದಿಂದಲೇ ಅಂದರೆ ದಿನಾಂಕ:06.06.2008 ರಿಂದ ಜಾರಿಗೆ ಬರುವಂತೆ ನಿಮ್ಮನ್ನು ಸೇವೆಯಿಂದ ವಜಾಗೊಳಿಸಲು ಉಲ್ಲೇಖ 1 ರ ಪತ್ರದಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅನುಮತಿ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ನಿಮಗೆ ಈ ಮೂಲಕ ಅಂತಿಮವಾಗಿ ತಿಳಿಸುವುದೇನೆಂದರೆ ಈ ಅಂತಿಮ ನೋಟೀಸ್ ತಲುಪಿದ 15 ದಿನಗಳ ಒಳಗಾಗಿ ನೀವು ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿದೆ. ಆದಾಗ್ಯೂ ನೀವು ಸೇವೆಗೆ ಹಾಜರಾಗದಿದ್ದಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 14 (2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಮ್ಮನ್ನು ನಿಯಮಾನುಸಾರ ಸೇವೆಯಿಂದ ವಜಾ ಮಾಡಲು ಕ್ರಮ ವಹಿಸಲಾಗುವುದು ಎಂದು ಈ ಮೂಲಕ ಸೂಚಿಸಲಾಗಿದೆ.

ಉಪನಿರ್ದೇಶಕರು (ಆಡಳಿತ),
ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

ಪಿ.ಆರ್.1249

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆರವರ ಕಾರ್ಯಾಲಯ, ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**

**ಕ್ರಮಾಂಕ: ಡಿಆರ್‌ಬಿ–1/ಗೃಹ/ಪುನಃಶ್ಚೇತನ/10/2009–10, ದಿನಾಂಕ:27ನೇ ನವೆಂಬರ್, 2009**

**ವಿಷಯ:** ಸಮಾಪನೆಯಲ್ಲಿರುವ ದಿ ಮಿನರ್ವಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು–23 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ–1/ ಎಲ್‌ಕ್ಯೂಡಿ/ 57/ 1996–97 ದಿನಾಂಕ:17.12.1996.

2) ಸಮಾಪನಾಧಿಕಾರಿ, ದಿ ಮಿನರ್ವ ಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು–23 ಹಾಗೂ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ–2, ಸ.ಸಂ.ಸಹಾಯಕ ನಿಬಂಧಕರ ಕಛೇರಿ, 1ನೇ ವಲಯ, ಬೆಂಗಳೂರು ಇವರ ವರದಿ ದಿನಾಂಕ:02.11.2009 ಮತ್ತು 23.11.2009.

**ಪ್ರಸ್ತಾವನೆ:**

ದಿ ಮಿನರ್ವಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು–23 ಈ ಸಂಘವು ಅನೇಕ ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದ ಪ್ರಯುಕ್ತ, ಈ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು ಮನಗಂಡು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರ ರೀತ್ಯಾ ಹೊರಡಿಸಿರುವ ಉಲ್ಲೇಖ (1)ರಲ್ಲಿ ನಮೂದಿಸಿರುವ ಈ ಕಛೇರಿಯ ದಿನಾಂಕ:17.12.1996ರ ಆದೇಶದಲ್ಲಿ ಸಮಾಪನೆಗೊಳಿಸಿ ಕಲಂ 73ರಂತೆ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರನ್ನು ಈ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕಾತಿ ಮಾಡಲಾಗಿತ್ತು.

ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2 ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಹಾಗೂ ಸಮಾಪನಾಧಿಕಾರಿ, ದಿ ಮಿನರ್ವಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು–23 ರವರು ಉಲ್ಲೇಖ (2)ರಂತೆ ಈ ಕಛೇರಿಗೆ ಸಲ್ಲಿಸಿರುವ ವರದಿಯಲ್ಲಿ ಸಮಾಪನಾಧಿಕಾರಿಯಾಗಿ ಸದರಿ ಸಂಘದ ಪ್ರಭಾರವನ್ನು ಪಡೆದು ಕೆಲಸ ನಿರ್ವಹಿಸುತ್ತಿರುವುದಾಗಿ ಸಮಾಪನಾ ಆದೇಶದಲ್ಲಿರುವ ಷರತ್ತು ಮತ್ತು ನಿಯಮಗಳನುಸಾರ ಈವರೆಗೂ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ಸಾಧ್ಯವಾಗಿರುವುದಿಲ್ಲವೆಂದು ವರದಿಯಲ್ಲಿ ವಿವರಿಸುತ್ತಾ, ಪ್ರಸ್ತುತ ಸದರಿ ಸಮಾಪನಾ ಸಂಘದ 41 ಜನ ಸದಸ್ಯರುಗಳು ದಿನಾಂಕ:21.10.2009 ರಂದು ಮನವಿಯನ್ನು ಸಲ್ಲಿಸಿ ಸದರಿ ಮನವಿಯಲ್ಲಿ ಈ ಸಂಘವು 1976–77ನೇ ಸಾಲಿನಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ರವರ ಕಛೇರಿಯಲ್ಲಿ ಕ್ರಮಸಂಖ್ಯೆ: ಎಆರ್ ಬಿ1/ಬಿ/ಆರ್‌ಇಜಿಎನ್/4851/1976–77 ದಿನಾಂಕ:21.04.1976ರಂತೆ ನೋಂದಣಿಯಾಗಿದ್ದು, ಸಮಾಪನಾ ಸಂಘದಲ್ಲಿ ದಿನಾಂಕ:31.03.2007ಕ್ಕೆ 338 ಸದಸ್ಯರುಗಳು ಸಂಘದಲ್ಲಿ ಇದ್ದು, ಈ ಎಲ್ಲಾ ಸದಸ್ಯರುಗಳು ಸಂಘದಲ್ಲಿ ಹಿರಿಯ ಸದಸ್ಯರುಗಳಾಗಿದ್ದು, ಬಹಳ ಕಷ್ಟದಿಂದ ಶ್ರಮಪಟ್ಟು ಷೇರುಹಣವನ್ನು ಪಾವತಿಸಿ ಸಂಘದ ಸ್ಥಾಪನೆಗೆ ಕಾರಣಕರ್ತರಾಗಿರುವುದಾಗಿ, ಈ ಸದಸ್ಯರುಗಳು ಬಹುದಿನದಿಂದ ನಿವೇಶನಕ್ಕಾಗಿ ಕಾಯುತ್ತಿದ್ದು, ಈ ಸದಸ್ಯರುಗಳ ಹಿತಾಸಕ್ತಿಯ ದೃಷ್ಟಿಯಿಂದ ಸಂಘವನ್ನು ಪುನಃಶ್ಚೇತನಗೊಳಿಸಿಕೊಂಡು ನೆಲಮಂಗಲದ ಹತ್ತಿರ ಭೂಮಿಯನ್ನು ಖರೀದಿಸಲು ಉದ್ದೇಶಿಸಿರುವುದಾಗಿ, ಸಂಘವನ್ನು ಪುನಃಶ್ಚೇತನಗೊಳಿಸಿಕೊಟ್ಟಲ್ಲಿ, ಆದಷ್ಟು ಶೀಘ್ರವಾಗಿ ಜಮೀನು ಖರೀದಿಸಿ ಬಡಾವಣೆ ನಿರ್ಮಿಸಿ ಸದಸ್ಯರುಗಳಿಗೆ ನಿವೇಶನ ಹಂಚಿಕೆ ಮಾಡುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ಸಂಘದ ಬಗ್ಗೆ ಹಿತಾಸಕ್ತಿ ಹೊಂದಿರುವ 41 ಜನ ಸದಸ್ಯರುಗಳು ಜಮೀನು ಖರೀದಿಸಿ ಬಡಾವಣೆ ನಿರ್ಮಿಸಲು ಉದ್ದೇಶಿಸಿರುವುದಾಗಿ ಹಾಗೂ ಸಂಘದ ಬಗ್ಗೆ ಹಿತಾಸಕ್ತಿ ಹೊಂದಿದ್ದು ಉತ್ಸಾಹಕರಾಗಿ ಮುಂದೆ ಬಂದಿರುವುದಾಗಿ ಸಮಾಪನಾಧಿಕಾರಿಯವರು, ಉಲ್ಲೇಖ (2)ರಂತೆ ಈ ಕಛೇರಿಗೆ ಸಲ್ಲಿಸಿರುವ ವರದಿಯಲ್ಲಿ ಪ್ರಸ್ತಾಪಿಸಿ ಸಂಘದ ಸದಸ್ಯರುಗಳ ಹಿತದೃಷ್ಟಿಯಿಂದ ದಿ ಮಿನರ್ವಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಈ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತೀರ್ಮಾನ ತೆಗೆದುಕೊಂಡು ಶಿಫಾರಸ್ಸು ಮಾಡಿರುತ್ತಾರೆ.

ಸಮಾಪನಾಧಿಕಾರಿಯವರು ಉಲ್ಲೇಖ (2)ರಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸಂಘದಲ್ಲಿ ನಗದು ಹಾಗೂ ಬ್ಯಾಂಕಿನಲ್ಲಿರುವ ಒಟ್ಟು ಹಣ ರೂ.3,310–00 ಗಳು ಇರುತ್ತದೆ. ಜವಾಬ್ದಾರಿ ರೂ.2,24,693–00 ಗಳು ಇರುತ್ತದೆ. ಸಂಘದಲ್ಲಿ ಯಾವುದೇ ಆಸ್ತಿ ಇಲ್ಲದೇ ಇರುವುದರಿಂದ ಜವಾಬ್ದಾರಿಯನ್ನು ತೀರುವಳಿ ಮಾಡಲು ಕಷ್ಟಕರವಾಗಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಸಂಘದ ಸದಸ್ಯರುಗಳೇ ಸಂಘವನ್ನು ಪುನಃಶ್ಚೇತನಗೊಳಿಸಿಕೊಂಡು ಕಾರ್ಯಕ್ರಮಗಳನ್ನು ರೂಪಿಸಿಕೊಂಡು ವ್ಯವಹಾರ ನಡೆಸಿಕೊಂಡು ಹೋಗಲು ಮುಂದೆ ಬಂದಿರುವುದರಿಂದ ಸಂಘವು ಹೊಂದಿರುವ ಜವಾಬ್ದಾರಿಯನ್ನು ಸಂಘವನ್ನು ಪುನಃಶ್ಚೇತನಗೊಳಿಸಿಕೊಟ್ಟಲ್ಲಿ ಮುಂದೆ ಹೊಸದಾಗಿ ಚುನಾಯಿತರಾಗುವ ಕಾರ್ಯಕಾರಿ ಸಮಿತಿ ಸದಸ್ಯರುಗಳು ಸಂಘದ ಅಭಿವೃದ್ಧಿ ಹಾಗೂ ಬೆಳವಣಿಗೆಗೆ ಕಾರ್ಯಕ್ರಮ ರೂಪಿಸಿಕೊಂಡು ಸಂಘದ ಜವಾಬ್ದಾರಿಯನ್ನು ತೀರುವಳಿ ಮಾಡಲು ಅನುಕೂಲವಾಗುವುದರಿಂದ ಸಮಾಪನಾಧಿಕಾರಿಯವರು ಉಲ್ಲೇಖ (2)ರಂತೆ ಸಲ್ಲಿಸಿರುವ ವರದಿಯು ಸ್ವಾಭಾವಿಕ ನ್ಯಾಯ ತತ್ವಗಳಿಗೆ ಅನುಗುಣವಾಗಿರುವುದರಿಂದ ಹಾಗೂ ಸದಸ್ಯರುಗಳ ಹಿತಾಸಕ್ತಿಗೆ ಉತ್ತೇಜನ ನೀಡಿದಂತೆ ಆಗುವುದರಿಂದ ಸಮಾಪನಾಧಿಕಾರಿಯವರ ಮನವಿಯನ್ನು ಪರಿಗಣಿಸಿ ಪುನಃಶ್ಚೇತನಗೊಳಿಸಿ ಕೊಡುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲ್ಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:20.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಡಿ.ಪಾಂಡುರಂಗಪ್ಪ, ಸಹಕಾರ ಸಂಘಗಳ ಉಪನಿಬಂಧಕರು–1 ಬೆಂಗಳೂರು ನಗರ ಜಿಲ್ಲೆ, ಆದ ನಾನು ದಿ ಮಿನರ್ವಮಿಲ್ಸ್ ಎಂಪ್ಲಾಯೀಸ್ ಅಂಡ್ ಅದರ್ಸ್ ಎಂಪ್ಲಾಯೀಸ್ ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು–23 ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಬಿ–1/ಎಲ್‌ಕ್ಯೂಡಿ/57/1996–97 ದಿನಾಂಕ:17.12.1996 ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸದರಿ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ 2009–10 ರಿಂದ 2013–2014ನೇ ಸಾಲುಗಳ ಅವಧಿಗೆ ಸಂಘದ ಆಡಳಿತ ಮಂಡಳಿಗೆ ನಿರ್ದೇಶಕರನ್ನು ಚುನಾಯಿಸಲು ಸಹಕಾರ ಸಂಘಗಳ ನಿಯಮ 14 ರನ್ವಯ ಚುನಾವಣೆಯನ್ನು ನಡೆಸಲು ಶ್ರೀ ಹೆಚ್.ಎಂ. ಅಪ್ಪಾಜಿಗೌಡ, ಸಹಕಾರ ಅಭಿವೃದ್ಧಿ ಅಧಿಕಾರಿ ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕಾತಿ ಮಾಡಿರುತ್ತೇನೆ.

ಚುನಾವಣಾಧಿಕಾರಿಯವರು ಸದರಿ ಸಂಘದ ಆಡಳಿತ ಮಂಡಳಿಗೆ ನಿಯಮಾನುಸಾರ ಚುನಾವಣೆಯನ್ನು ಜರುಗಿಸಿ ಈ ಕಛೇರಿಗೆ ವರದಿ ಮಾಡುವಂತೆ ಆದೇಶಿಸಲಾಗಿದೆ.

**ಷರತ್ತುಗಳು:**

1) ಸಂಘವು ನೋಂದಾಯಿತ ಕಛೇರಿಯನ್ನು ಹೊಂದಿರಬೇಕು.

2) ಸಂಘವು ಪುನಃಶ್ಚೇತನಗೊಂಡ 3 ತಿಂಗಳೊಳಗಾಗಿ ಸದಸ್ಯರುಗಳಿಂದ ಕನಿಷ್ಠ ರೂ.4,00,000/–ಗಳ ಷೇರು ಹಣ ಸಂಗ್ರಹಿಸುವುದು.

3) ಸಂಘಕ್ಕೆ ವೇತನ ಕಾರ್ಯದರ್ಶಿಯನ್ನು ನೇಮಕಾತಿ ಮಾಡಿಕೊಳ್ಳುವುದು.

4) ಕರ್ನಾಟಕ ಸಹಕಾರ ಸಂಘಗಳ ನಿಯಮಾನುಸಾರ ಸಂಘವು ಆರ್ಥಿಕ ಸದೃಢತೆಯಿಂದ ನಡೆಯುವ ಸಾಧ್ಯತೆ ಇರಬೇಕು.

5) ಲೆಕ್ಕಪರಿಶೋಧನಾ ಇಲಾಖೆಯಿಂದ ಕಾಲಕಾಲಕ್ಕೆ ಲೆಕ್ಕಪುಸ್ತಕಗಳನ್ನು ಲೆಕ್ಕಪರಿಶೋಧನೆ ಮಾಡಿಸಲು ಕ್ರಮವಿಡತಕ್ಕದ್ದು.

6) ಆಡಿಟ್ ವರದಿಯಂತೆ ಸಂಘವು ಹೊಂದಿರುವ ಜವಾಬ್ದಾರಿಯನ್ನು ಪುನಃಶ್ಚೇತನಗೊಂಡ 6 ತಿಂಗಳೊಳಗೆ ತೀರುವಳಿ ಮಾಡತಕ್ಕದ್ದು.

7) ಸಂಘದ ಉಪನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ದಿನಾಂಕ:27.11.2009 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು–1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.1252

**URBAN DEVELOPMENT DEPARTMENT**

**NOTIFICATION**

**No.UDD/568/MNX/2007, Bangalore, Dated:6th November, 2009**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdraw from acquisition the lands specified below in respect of which the Preliminary Notification was published in the Karnataka Gazette Dated:15.12.1988, pages 362 to 378 and Dated:29.12.1988 pages 399 to 414 vide Notification No.BDA/ALAO/A1/PR/117, Dated:15.12.1988 and Final Notification No.HUD 334 MNX 1990 dated:03-11-1990 was published in the Karnataka Gazette Dated:20.11.1990 under sub-section(1) of Section-19 of BDA Act 1976 (Karnataka Act-12 of 1976) for formation of layout Called "BYRASANDRA TAVAREKERE MADIVALA IVTH STAGE LAYOUT".

**SCHEDULE**

**DISTRICT:BANGALORE TALUK: BANGALORE SOUTH HOBLI:BEGUR VILLAGE:BELAKANAHALLI**

| Sl. No. | Name of the Khatedar/Anubhavadar Sri/Smt. | Sy.No. | Dry/ Wet/ Garden | Total Extent | Kharab | Remaining Extent | Assessment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | M. Chinnappa,<br>M. Chennappa | 8/2 | Dry,<br>Garden | 0-33 | 0-11 | 1-16<br>2-09 | 2-36<br>11-79 | 3-36 | **0-19** | 8/1 | 185 | 7 | 9, 7/3 |
| | | | | Total | | | | | **0-19** | | | | |

**TOTAL EXTENT WITH DRAWN 19 GUNTAS (Ninteen guntas Only)**

By Order and in the name of the Governor of Karnataka,

**M.S. PREMACHANDRA**

Under Secretary to Government,

Urban Development Department.

PR-1216

